ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರುವರಿ, 2021

ಕಲಬುರಗಿಯಲ್ಲಿನ ಕಲ್ಲು ಗಣಿಕಾರಿಕೆ ಬಗ್ಗೆ

ಶ್ರೀ ಎಂ.ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

182(261) ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಲಬುರಗಿ ಜಿಲ್ಲೆ, ಬೇಲೂರು ಗ್ರಾಮದಲ್ಲಿ ಕಲ್ಲು ಗಣಿಗಾರಿಕೆ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ ; (ವಿವರ ನೀಡುವುದು)

(ಆ) ಗ್ರಾಮದ ಸರಹದ್ದಿನ 500 ಮೀಟರ್ ಅಂತರದಲ್ಲಿ ಡೈನಾಮೆಟ್ ಸ್ಫೋಟ ಮಾಡುತ್ತಿದ್ದು, ಇದರಿಂದ ಗ್ರಾಮದ ಮನೆಗಳು ಹಾನಿಗೊಳಗಾಗಿ ಜನರಿಗೆ ಆರೋಗ್ಯ ಸಮಸ್ಯೆ ಕಾಡುತ್ತಿದ್ದು ಈ ಬಗ್ಗೆ ಜಿಲ್ಲಾಡಳಿತ ಯಾವ ಕ್ರಮ ಕೈಗೊಂಡಿದೆ ; (ವಿವರ ನೀಡುವುದು)

(ಇ) ಇಲ್ಲಿಯವರೆವಿಗೂ ರಾಜ್ಯದಲ್ಲಿ ಗಣಿಗಾರಿಕೆಗಾಗಿ ಎಷ್ಟು ಪರವಾನಗಿ ನೀಡಲಾಗಿದೆ ; (ಜಿಲ್ಲಾವಾರು ವಿವರ ನೀಡುವುದು)

(ಈ) ರಾಜ್ಯದಲ್ಲಿ ಹಲವಾರು ಕಡೆ ಅಕ್ರಮವಾಗಿ ಗಣಿಗಾರಿಕೆ ನಡೆಯುತ್ತಿದ್ದು, ಈ ರೀತಿಯ ಅಕ್ರಮ ಗಣಿಗಾರಿಕೆಗೆ ಯಾವ ರೀತಿ ಸರ್ಕಾರ ಕ್ರಮ ಕೈಗೊಳ್ಳಲಾಗುತ್ತಿದೆ ? (ವಿವರ ನೀಡುವುದು)